# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1599
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ವಾಹನ ಸವಾರರು ಸಂಚಾರಿ ನಿಯಮ ಪಾಲಿಸದೇ ರಸ್ತೆಯಲ್ಲಿ ದಿನನಿತ್ಯ ಅನಾಹುತಗಳು, ಸಾವು-ನೋವುಗಳು ಸಂಭವಿಸುತ್ತಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿರುತ್ತದೆ. |
| (ಆ) | ಹಾಗಿದ್ದಲ್ಲಿ, ರಸ್ತೆಯಲ್ಲಾಗುತ್ತಿರುವ ಅವಘಡಗಳನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಸರ್ಕಾರವು ಹಮ್ಮಿಕೊಂಡಿರುವ ಯೋಜನೆಗಳಾವುವು ; ರೂಪಿಸಿರುವ ಕಠಿಣ ಸಂಚಾರಿ ನಿಯಮಗಳೇನು ; ಸದರಿ ನಿಯಮಗಳು ಕಟ್ಟುನಿಟ್ಟಾಗಿ ಯಾವಾಗ ಜಾರಿಗೆ ಬರುತ್ತವೆ ; | 1. ರಾಜ್ಯದಲ್ಲಿ ಸಂಭವಿಸುವ ರಸ್ತೆ ಅಪಘಾತಗಳನ್ನು ತಡೆಗಟ್ಟಲು/ ನಿಯಂತ್ರಿಸಲು ಹಲವಾರು ಯೋಜನೆಗಳನ್ನು ಕೈಗೊಂಡಿದ್ದು, ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br>2. ಭಾರತೀಯ ಮೋಟಾರು ವಾಹನ ಕಾಯ್ದೆಯಡಿಯಲ್ಲಿ ಜಾರಿಯಲ್ಲಿರುವ ಸಂಚಾರ ನಿಯಮಗಳನ್ನು ಮಾತ್ರ ಅನುಷ್ಠಾನಗೊಳಿಸುತ್ತಿದ್ದು, ಈ ನಿಯಮಗಳಿಗೆ ಕಾಲ ಕಾಲಕ್ಕೆ ಹೊರಡಿಸುವ ತಿದ್ದುಪಡಿಗಳನ್ನು ಮತ್ತು ಭಾರತದ ರಸ್ತೆ ಸಾರಿಗೆ & ಹೆದ್ದಾರಿ ಸಚಿವಾಲಯ (MoRTH) ಹಾಗೂ ರಾಜ್ಯ ಸರ್ಕಾರವು ಸಂಚಾರ ನಿಯಮಗಳ ಬಗ್ಗೆ ಹೊರಡಿಸುವ ಹೆಚ್ಚುವರಿ ಅಧಿಸೂಚನೆ/ನಿರ್ದೇಶನ/ಸೂಚನೆಗಳನ್ನು ಜಾರಿಗೆ ತರುವುದರ ಮೂಲಕ ಸಂಚಾರ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಲಾಗುತ್ತಿದೆ. |
| (ಇ) | ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ರಸ್ತೆ ಅಪಘಾತಗಳಿಂದ ಉಂಟಾಗಿರುವ ನಷ್ಟವನ್ನು ಅಂದಾಜಿಸಲಾಗಿದೆಯೇ ; (ವಿವರ ನೀಡುವುದು) | ಅನ್ವಯಿಸುವುದಿಲ್ಲ. |
| (ಈ) | ಸಂಚಾರಿ ನಿಯಮ ಉಲ್ಲಂಘಿಸಿದ ವಾಹನ ಸವಾರರ ವಿರುದ್ಧ ಕಠಿಣ ಕ್ರಮ ಹಾಗೂ ಶುಲ್ಕ ವಿಧಿಸುವ ಬದಲು ಅವರೊಂದಿಗೆ ಪೋಲೀಸರು ಚೌಕಾಸಿಗೆ ಇಳಿದು ಲಂಚ ಪಡೆದು ಸಂಚಾರಿ ನಿಯಮ ಉಲ್ಲಂಘಿಸುತ್ತಿರುವುದು ನಿಜವೇ ; | ಸಂಚಾರ ನಿಯಮಗಳನ್ನು ಉಲ್ಲಂಘಿಸುವ ವಾಹನ ಚಾಲಕರುಗಳ ವಿರುದ್ಧ ಭಾರತೀಯ ಮೋಟಾರು ವಾಹನ ಕಾಯ್ದೆಯಡಿಯಲ್ಲಿ ಸರ್ಕಾರವು ಕಾಲ ಕಾಲಕ್ಕೆ ಪರಿಷ್ಕೃತವಾಗಿ ನಿಗದಿಪಡಿಸಿದ ದಂಡ ಮೊತ್ತವನ್ನು ಮಾತ್ರ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡಲಾಗುತ್ತಿದೆ. |
| (ಉ) | ಹಾಗಾದರೆ, ಅಂತಹವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು) | 2018 ರಿಂದ 2021(ಫೆಬ್ರವರಿ)ರ ಅವಧಿಯಲ್ಲಿ ದಂಡ ಮೊತ್ತ ವಸೂಲಾತಿ ಮಾಡುವ ಸಂದರ್ಭದಲ್ಲಿ ವಾಹನ ಸವಾರರಿಂದ ಬಂದಂತಹ ದೂರಿನನ್ವಯ ಒಟ್ಟು 27 ಪ್ರಕರಣಗಳಲ್ಲಿ ಭಾಗಿಯಾದಂತಹ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವಿರುದ್ಧ ಕೆ.ಎಸ್.ಪಿ.(ಡಿ.ಪಿ.) ನಿಯಮಗಳನ್ವಯ ಶಿಸ್ತಿನ ಕ್ರಮವನ್ನು ಕೈಗೊಳ್ಳಲಾಗಿರುತ್ತದೆ. |

**ಹೆಚ್‌ಡಿ 190 ಎಸ್‌ಎಸ್‌ಟಿ 2021**

(ಬಸವರಾಜ ಬೊಮ್ಮಾಯಿ)
**ಗೃಹ ಮತ್ತು ಕಾನೂನು,**
**ಸಂಸದೀಯ ವ್ಯವಹಾರಗಳು**
**ಮತ್ತು ಶಾಸನ ರಚನಾ ಸಚಿವರು**

**ಅನುಬಂಧ – 1**

**ಪ್ರಶ್ನೆ: ರಸ್ತೆಯಲ್ಲಿ ಆಗುತ್ತಿರುವ ಅವಘಡಗಳನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಸರ್ಕಾರವು ಹಮ್ಮಿಕೊಂಡಿರುವ ಯೋಜನೆಗಳು :–**

ರಸ್ತೆ ಅಪಘಾತಗಳನ್ನು ತಡೆಗಟ್ಟಲು/ನಿಯಂತ್ರಿಸಲು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 295/2012ರ ತೀರ್ಪಿನಲ್ಲಿ ಹಲವಾರು ನಿರ್ದೇಶನಗಳನ್ನು ನೀಡಿದ್ದು, ಈ ನಿರ್ದೇಶನಗಳನ್ನು ಅನುಷ್ಠಾನಗೊಳಿಸಲು ಮಾನ್ಯ ನ್ಯಾಯಾಲಯವು ಸರ್ವೋಚ್ಚ ನ್ಯಾಯಾಲಯದ ರಸ್ತೆ ಸುರಕ್ಷತಾ ಸಮಿತಿಯನ್ನು (Supreme Court Committee on Road Safety) ರಚಿಸಿರುತ್ತದೆ.

ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಮತ್ತು ಸರ್ವೋಚ್ಚ ನ್ಯಾಯಾಲಯದ ರಸ್ತೆ ಸುರಕ್ಷತಾ ಸಮಿತಿಯು ಆಗಿಂದಾಗ್ಗೆ ನೀಡುವ ನಿರ್ದೇಶನ/ಸೂಚನೆಗಳನ್ನು ಅನುಷ್ಠಾನಗೊಳಿಸಲು ಮತ್ತು ಪಾಲನೆ ಮಾಡಲು ರಾಜ್ಯ ಸರ್ಕಾರವು ಮಾನ್ಯ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯ ರಸ್ತೆ ಸುರಕ್ಷತಾ ಪ್ರಾಧಿಕಾರವನ್ನು (Karnataka State Road Safety Authority) ರಚಿಸಿರುತ್ತದೆ.

ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ರಸ್ತೆ ಸುರಕ್ಷತಾ ಸಮಿತಿ ಮತ್ತು ಕರ್ನಾಟಕ ರಾಜ್ಯ ರಸ್ತೆ ಸುರಕ್ಷತಾ ಪ್ರಾಧಿಕಾರದ ನಿರ್ದೇಶನ ಮತ್ತು ಸೂಚನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮತ್ತು ಪಾಲನೆ ಮಾಡಲು ಹಾಗೂ ರಸ್ತೆ ಅಪಘಾತಗಳನ್ನು ತಡೆಗಟ್ಟಲು/ನಿಯಂತ್ರಿಸಲು ಇಲಾಖಾವತಿಯಿಂದ ಈ ಕೆಳಕಂಡಂತೆ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.

1. ರಾಜ್ಯದ ಹೆದ್ದಾರಿಗಳಲ್ಲಿ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಆಟೋಮೇಟೆಡ್ ಬ್ಯಾಕ್‌ಸ್ಪಾಟ್ ಎನ್‌ಫೋರ್ಸ್‌ಮೆಂಟ್ ಸಿಸ್ಟಂ ಯೋಜನೆಯನ್ನು ಜಾರಿಗೊಳಿಸಲು ಉದ್ದೇಶಿಸಲಾಗಿದೆ. ಪ್ರಾಯೋಗಿಕವಾಗಿ 30 ಬ್ಲಾಕ್‌ಸ್ಪಾಟ್‌ಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ.
2. ರಾಜ್ಯದಲ್ಲಿ ಸಂಭವಿಸುವ ರಸ್ತೆ ಅಪಘಾತಗಳನ್ನು ತಡೆಗಟ್ಟಲು ರಸ್ತೆ ಅಪಘಾತ ನಡೆದ ಸ್ಥಳದಲ್ಲಿಯೇ ಮಾಹಿತಿಯನ್ನು ಸಂಗ್ರಹಿಸಲು ಅನುಕೂಲವಾಗುವಂತೆ ಭಾರತ ಸರ್ಕಾರದ ರಸ್ತೆ ಸಾರಿಗೆ ಮತ್ತು ಹೆದ್ದಾರಿ ಸಚಿವಾಲಯದ ಯೋಜನೆಯಾದ iRAD (Integrated Road Accident Database) ಅನ್ನು ಅನುಷ್ಠಾನಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ. ಪ್ರಾಯೋಗಿಕವಾಗಿ ಈಗಾಗಲೇ ಬೆಳಗಾವಿ ಜಿಲ್ಲೆ, ಬೀದರ್ ಜಿಲ್ಲೆ, ಮಂಡ್ಯ ಜಿಲ್ಲೆ ಮತ್ತು ತುಮಕೂರು ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ಮುಂದಿನ ದಿನಗಳಲ್ಲಿ ಈ ಯೋಜನೆಯನ್ನು ರಾಜ್ಯಾದ್ಯಂತ ವಿಸ್ತರಿಸಲಾಗುವುದು.
3. ರಸ್ತೆ ಸುರಕ್ಷತೆ ಮತ್ತು ಸಂಚಾರ ನಿಯಮಗಳ ಬಗ್ಗೆ ಸಾರ್ವಜನಿಕರಲ್ಲಿ, ಶಾಲಾ ಮಕ್ಕಳಲ್ಲಿ, ವಾಹನ ಚಾಲಕರು/ಮಾಲೀಕರವರುಗಳಿಗೆ ಅರಿವು ಮೂಡಿಸಲು ಠಾಣಾ ಮಟ್ಟದಲ್ಲಿ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.
4. ಪ್ರತಿ ವರ್ಷ ಜನವರಿ/ಫೆಬ್ರವರಿ ಮಾಹೆಯಲ್ಲಿ ರಾಜ್ಯಾದ್ಯಂತ ರಸ್ತೆ ಸುರಕ್ಷತಾ ಸಪ್ತಾಹವನ್ನು ಆಚರಿಸಿ ಅಪಘಾತಗಳನ್ನು ತಡೆಗಟ್ಟುವ ಬಗ್ಗೆ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

5. ರಸ್ತೆ ಅಪಘಾತಗಳನ್ನು ತಡೆಗಟ್ಟುವ ಬಗ್ಗೆ ಸಾಮಾಜಿಕ ಜಾಲತಾಣಗಳಾದ ವಾಟ್ಸ್‌ಅಪ್, ಟ್ವಿಟರ್, ಫೇಸ್ ಬುಕ್ ಮೂಲಕ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.

6. ರಾಷ್ಟ್ರೀಯ/ರಾಜ್ಯ ಮತ್ತು ಇನ್ನಿತರ ರಸ್ತೆಗಳಲ್ಲಿ ಅವೈಜ್ಞಾನಿಕವಾಗಿ ನಿರ್ಮಿಸಿರುವ ರಸ್ತೆ ಉಬ್ಬುಗಳನ್ನು ತೆರವುಗೊಳಿಸಿ ಇಂಡಿಯನ್ ರೋಡ್ ಕಾಂಗ್ರೆಸ್ ಮಾರ್ಗ (IRC) ಸೂಚಿಗಳನ್ವಯ ರಸ್ತೆ ಉಬ್ಬುಗಳನ್ನು ನಿರ್ಮಿಸಲು ಸಂಬಂಧಪಟ್ಟ ಇಲಾಖೆಗಳಿಗೆ ಸೂಕ್ತ ಸೂಚನೆಗಳನ್ನು ನೀಡಲಾಗುತ್ತಿದೆ.

7. ರಾಷ್ಟ್ರೀಯ/ರಾಜ್ಯ ಮತ್ತು ಇನ್ನಿತರ ರಸ್ತೆಗಳ ಅಪಘಾತ ವಲಯ ಸ್ಥಳಗಳಲ್ಲಿ ಕ್ಯಾಟ್ ಐಸ್ ಮತ್ತು ಹಾಜಾರ್ಡ್ ಬೋರ್ಡ್‌ಗಳನ್ನು ಅಳವಡಿಸಿ ವಾಹನ ಚಾಲಕರುಗಳಿಗೆ ಅರಿವು ಮೂಡಿಸಲಾಗುತ್ತಿದೆ.

8. ರಾಜ್ಯ ಸರ್ಕಾರವು ಹೆದ್ದಾರಿ ಸುರಕ್ಷತಾ ಯೋಜನೆಯಡಿಯಲ್ಲಿ ರಸ್ತೆ ಅಪಘಾತಗಳನ್ನು ನಿಯಂತ್ರಿಸಲು ಮತ್ತು ಅಪಘಾತದಲ್ಲಿ ಗಾಯಗೊಂಡವರನ್ನು ಹತ್ತಿರದ ಟ್ರಾಮಾ ಕೇರ್ ಸೆಂಟರ್‌ಗಳಿಗೆ ಮತ್ತು ಆಸ್ಪತ್ರೆಗಳಿಗೆ ಸಾಗಿಸಲು 300 ಹೈವೇ ಪೆಟ್ರೋಲ್ ವಾಹನಗಳನ್ನು ಮಂಜೂರು ಮಾಡಿದ್ದು, ಸದರಿ ವಾಹನಗಳಿಂದ ರಸ್ತೆ ಅಪಘಾತಗಳನ್ನು ತಡೆಗಟ್ಟಲು ರಾಷ್ಟ್ರೀಯ/ರಾಜ್ಯ ಹೆದ್ದಾರಿಗಳಲ್ಲಿ ಸದರಿ ವಾಹನಗಳನ್ನು ಗಸ್ತು ಕರ್ತವ್ಯವನ್ನು ಮಾಡಲು ನಿಯೋಜಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಕ್ರಮಕೈಗೊಳ್ಳಲಾಗುತ್ತಿದೆ.

9. ರಾಷ್ಟ್ರೀಯ/ರಾಜ್ಯ ಹೆದ್ದಾರಿ ಹಾಗೂ ಇನ್ನಿತರ ರಸ್ತೆಗಳಲ್ಲಿ ಅತೀ ವೇಗವಾಗಿ ಮತ್ತು ಅಜಾಗರೂಕತೆಯಿಂದ ವಾಹನ ಚಾಲನೆ ಮಾಡುವ ಚಾಲಕರುಗಳ ವಿರುದ್ಧ ಐ.ಎಂ.ವಿ. ಕಾಯ್ದೆ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಲು ರಾಜ್ಯದ ಎಲ್ಲಾ ಘಟಕಗಳಲ್ಲಿ ಇಂಟರ್‌ಸೆಪ್ಟರ್ ವಾಹನಗಳನ್ನು ನಿಯೋಜಿಸಲಾಗಿದೆ.

10. ಅಪ್ರಾಪ್ತ ಶಾಲಾ ಮಕ್ಕಳಿಗೆ ದ್ವಿ-ಚಕ್ರ ವಾಹನಗಳನ್ನು ಚಲಾಯಿಸಲು ನೀಡದಂತೆ, ಒಂದು ವೇಳೆ ಅಪ್ರಾಪ್ತ ಶಾಲಾ ಮಕ್ಕಳಿಗೆ ಪೋಷಕರು ದ್ವಿ-ಚಕ್ರ ವಾಹನಗಳನ್ನು ನೀಡಿದ್ದಲ್ಲಿ ಪೋಷಕರ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಕುರಿತು ಪೋಷಕರಿಗೆ ಅರಿವು ಮೂಡಿಸಲಾಗುತ್ತಿದೆ.

11. ಸರಕು ವಾಹನಗಳಲ್ಲಿ ಕಾರ್ಮಿಕರನ್ನು, ಪ್ರಯಾಣಿಕರನ್ನು ಮತ್ತು ಶಾಲಾ ಮಕ್ಕಳನ್ನು ಸಾಗಿಸುತ್ತಿರುವುದು ಕಂಡು ಬಂದಲ್ಲಿ ಅಂತಹ ವಾಹನ ಚಾಲಕರುಗಳ ಮತ್ತು ವಾಹನಗಳ ಮಾಲೀಕರ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಮೂಲಕ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

12. ಆಟೋ ಚಾಲಕರುಗಳಿಗೆ, ಸರಕು ಸಾಗಣೆ ವಾಹನ ಚಾಲಕರುಗಳಿಗೆ, ಖಾಸಗಿ ವಾಹನ ಚಾಲಕರುಗಳಿಗೆ, ಕೆ.ಎಸ್.ಆರ್.ಟಿ.ಸಿ ಮತ್ತು ಬಿ.ಎಂ.ಟಿ.ಸಿ. ಚಾಲಕರುಗಳಿಗೆ ಆಗಿಂದ್ದಾಗೆ ಸಭೆಯನ್ನು ನಡೆಸಿ ರಸ್ತೆ ಸುರಕ್ಷತೆಯ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

13. ಶಾಲಾ ಮಕ್ಕಳು ಮತ್ತು ಪಾದಚಾರಿಗಳು ರಸ್ತೆಯನ್ನು ಸುರಕ್ಷಿತವಾಗಿ ದಾಟುವ ಕುರಿತು ಅರಿವು ಮೂಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುತ್ತಿದೆ.

14. ರಾಷ್ಟ್ರೀಯ/ರಾಜ್ಯ ಹೆದ್ದಾರಿ ಮತ್ತು ಇನ್ನಿತರೆ ರಸ್ತೆಗಳಲ್ಲಿ ಅಪಘಾತ ವಲಯ ನಿಧಾನವಾಗಿ ವಾಹನವನ್ನು ಚಲಾಯಿಸಿ **(Accident Prone Area Go Slow)** ಎಂಬ ನಾಮ ಫಲಕವನ್ನು ಪ್ರದರ್ಶಿಸುವುದರ ಮೂಲಕ ವಾಹನ ಚಾಲಕರುಗಳಿಗೆ ಅರಿವು ಮೂಡಿಸಲಾಗಿರುತ್ತದೆ.

15. ರಸ್ತೆ ಅಪಘಾತಗಳನ್ನು ವೈಜ್ಞಾನಿಕವಾಗಿ ತನಿಖೆ ನಡೆಸಲು ಪೋಲೀಸ್ ಇಲಾಖೆಯ ಅಧಿಕಾರಿಗಳು/ ಸಾರಿಗೆ ಇಲಾಖೆಯ ಅಧಿಕಾರಿಗಳು ಮತ್ತು ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳನ್ನೊಳಗೊಂಡ ಜಂಟಿ ತನಿಖಾ ಸಮಿತಿಯನ್ನು ರಚಿಸಿದ್ದು, ಈ ಸಮಿತಿಯು ರಸ್ತೆ ಅಪಘಾತಗಳಿಗೆ ಕಾರಣವಾಗಿರುವ ಅಂಶಗಳನ್ನು ಗುರುತಿಸಿ ಅಭಿಪ್ರಾಯ/ಸಲಹೆ ಮತ್ತು ಶಿಫಾರಸ್ಸುಗಳನ್ನು ಮಾಡುವುದರಿಂದ ಈ ಶಿಫಾರಸ್ಸುಗಳನ್ನು ಅನುಷ್ಠಾಗೊಳಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಕ್ರಮಕೈಗೊಳ್ಳಲಾಗುತ್ತಿದೆ.

16. ಭಾರತ ಸರ್ಕಾರದ ರಸ್ತೆ ಮತ್ತು ಸಾರಿಗೆ ಹೆದ್ದಾರಿ ಸಚಿವಾಲಯದ ಮಾರ್ಗಸೂಚಿಯನ್ವಯ ರಾಷ್ಟ್ರೀಯ/ರಾಜ್ಯ ಹೆದ್ದಾರಿ ಮತ್ತು ಇನ್ನಿತರ ರಸ್ತೆಗಳಲ್ಲಿ ಮೇಲಿಂದ ಮೇಲೆ ಸಂಭವಿಸುವ ಅಪಘಾತಗಳನ್ನು ಕಪ್ಪುಸ್ಥಳಗಳೆಂದು ಗುರುತಿಸಿ, ಈ ಅಪಘಾತ ಕಪ್ಪು ಸ್ಥಳಗಳನ್ನು ತೆರವುಗೊಳಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟುವ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

17. ಸುರಕ್ಷತಾ ಹಿತದೃಷ್ಟಿಯ ಮೇರೆಗೆ ಮತ್ತು ಸಂಚಾರ ದಟ್ಟಣೆಯನ್ನು ತಡೆಗಟ್ಟಲು ಸಾರ್ವಜನಿಕ ವಾಹನಗಳಲ್ಲಿ ಪ್ರಯಾಣಿಸುವಂತೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.

18. ರಾಷ್ಟ್ರೀಯ/ರಾಜ್ಯ ಹೆದ್ದಾರಿ ಹಾಗೂ ಇನ್ನಿತರ ರಸ್ತೆಗಳಲ್ಲಿ ಕಂಡು ಬರುವ ರಸ್ತೆ ಗುಂಡಿಗಳನ್ನು (Pot holes) ಸರಿಪಡಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ಕಡಿಮೆ ಮಾಡಲು ಕ್ರಮಕೈಗೊಳ್ಳಲಾಗುತ್ತಿದೆ.

19. ರಾಷ್ಟ್ರೀಯ/ರಾಜ್ಯ ಹೆದ್ದಾರಿ ಹಾಗೂ ಇನ್ನಿತರ ರಸ್ತೆಗಳ ಎರಡೂ ಬದಿಯಲ್ಲಿ ವಾಹನಗಳನ್ನು ನಿಲ್ಲಿಸುವುವವರ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಅಗತ್ಯ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

20. ಮದ್ಯಪಾನ ಸೇವಿಸಿ ವಾಹನ ಚಲಾಯಿಸುವ ವಾಹನ ಚಾಲಕರುಗಳ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಅಗತ್ಯ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

21. ಹೆಲ್ಮೆಟ್ ಧರಿಸದೇ ವಾಹನ ಚಲಾಯಿಸುವ ದ್ವಿ-ಚಕ್ರ ವಾಹನ ಚಾಲಕರುಗಳ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಅಗತ್ಯ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

22. ಸೀಟ್ ಬೇಲ್ಟ್ ಧರಿಸದೇ ವಾಹನ ಚಲಾಯಿಸುವ ವಾಹನ ಚಾಲಕರುಗಳ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಅಗತ್ಯ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

23. ವಿಮೆ ಇಲ್ಲದೇ ಸಂಚರಿಸುವ ವಾಹನಗಳ ವಿರುದ್ಧ ಪ್ರಕರಣಗಳನ್ನು ದಾಖಲಿಸುವುದರ ಮೂಲಕ ರಸ್ತೆ ಅಪಘಾತಗಳನ್ನು ತಡೆಗಟ್ಟಲು ಅಗತ್ಯ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

*** ** ***